


# ಕರ್ನಾಟಕ ವಿಧಾನಪರಿಷತ್ತು

ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

**ಚುಕ್ಕೆ ರಹಿತ ಪ್ರಶ್ನೆ**

ದಿನಾಂಕ : 18-03-2021 ಪ್ರಶ್ನೆ ಸಂಖ್ಯೆ : 1290(1631)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಎನ್. ಅಪ್ಪಾಜಿಗೌಡ(ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರ ನೀಡಬೇಕಾದ ದಿನಾಂಕ : 18-03-2021

ಉತ್ತರಿಸುವ ಸಚಿವರು: ಮಾನ್ಯ ಸಣ್ಣ ನೀರಾವರಿ ಸಚಿವರು

ವಿಷಯ : ಕಳೆದ ಮೂರು ವರ್ಷಗಳಲ್ಲಿ ಕೆರೆಗಳನ್ನು ಅಭಿವೃದ್ಧಿ ಪಡಿಸಲು ಬಿಡುಗಡೆಯಾಗಿರುವ ಅನುದಾನದ ಬಗ್ಗೆ

(ಅ) ನಾಗಮಂಗಲ ತಾಲ್ಲೂಕಿನ ವ್ಯಾಪ್ತಿಯಲ್ಲಿ ಸಣ್ಣ ನೀರಾವರಿ ಇಲಾಖೆ ವ್ಯಾಪ್ತಿಗೆ ಒಳಪಡುವ ಕೆರೆ-ಕಟ್ಟೆಗಳಾವುವು; (ಹೋಬಳಿವಾರು ಸಂಪೂರ್ಣ ಮಾಹಿತಿ ನೀಡುವುದು)

(ಆ) ಕೆರೆ-ಕಟ್ಟೆಗಳ ನಿರ್ಮಾಣ ಮಾಡಲು ಮತ್ತು ನಾಲೆ ವಿಸ್ತರಿಸಲು ವಶಪಡಿಸಿಕೊಂಡ ರೈತರ ಜಮೀನು ಎಷ್ಟು; (ಹೋಬಳಿವಾರು ವಿವರ ನೀಡುವುದು)

(ಇ) ಸದರಿ ಜಮೀನನ್ನು ವಶಪಡಿಸಿಕೊಂಡು ಇಲ್ಲಿಯವರೆಗೆ ಎಷ್ಟು ರೈತರಿಗೆ ಪರಿಹಾರ ಹಣ ನೀಡಲಾಗಿದೆ; ಅಥವಾ ಪರ್ಯಾಯ ವ್ಯವಸ್ಥೆ ಕಲ್ಪಿಸಲಾಗಿದೆ; ರೈತರಿಗೆ ಪರಿಹಾರದ ಹಣ ನೀಡಿರುವ ಸಂಪೂರ್ಣ ವಿವರ ನೀಡುವುದು;

(ಈ) ಇನ್ನೂ ಪರಿಹಾರ ನೀಡದೆ ಬಾಕಿಯಿರುವ ಪ್ರಕರಣಗಳೆಷ್ಟು; (ಹೋಬಳಿವಾರು ವಿವರ ನೀಡುವುದು)

(ಉ) ಕೆರೆ-ಕಟ್ಟೆ ನಿರ್ಮಾಣಕ್ಕೆ ಜಮೀನು ಕಳೆದುಕೊಂಡ ರೈತರಿಗೆ ಸರ್ಕಾರ ಯಾವ ಕಾಲಮಿತಿಯೊಳಗೆ ಪರಿಹಾರದ ಹಣ ನೀಡಲಾಗುವುದು; (ವಿವರ ನೀಡುವುದು)

(ಊ) ಕಳೆದ ಮೂರು ವರ್ಷಗಳಲ್ಲಿ ಇಲಾಖೆವತಿಯಿಂದ ಕೆರೆಗಳನ್ನು ಅಭಿವೃದ್ಧಿಪಡಿಸಲು ಬಿಡುಗಡೆಯಾಗಿರುವ ಅನುದಾನವೆಷ್ಟು? (ಸಂಪೂರ್ಣ ಮಾಹಿತಿ ನೀಡುವುದು)